## ॥ ಈಸಬೇಕು ಇದ್ದು ಜೈಸಬೇಕು ॥

ಈಸಬೇಕು ಇದ್ದು ಜೈಸಬೇಕು ।
ಹೇಸಿಗೆ ಸಂಸಾರದಲ್ಲಿ ಆಸೆ ಲೇಶ ಇಡದ್ಹಾಂಗೆ ॥ ಪ ॥

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು ।
ಸ್ವಾಮಿ ರಾಮನೆನುತ ಪಾಡಿ ।
ಕಾಮಿತ ಕೈಗೊಂಬರೆಲ್ಲ ॥ ೧ ॥

ಗೇರುಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ।
ಮೀರಿಯಾಸೆ ಮಾಡದಲೆ ।
ಧೀರ ಕೃಷ್ಣನ ಭಕುತರೆಲ್ಲ ॥ ೨ ॥

ಮಾಂಸದಾಸೆಗೆ ಮತ್ಸ್ಯ ಸಿಲುಕಿ ।
ಹಿಂಸೆ ಪಡುವ ಪರಿಯೊಳು ।
ಮೋಸ ಹೋಗದ್ಹಾಂಗೆ ಜಗ ।
ದೀಶ ಪುರಂದರ ವಿಠಲನ ನೆನೆದು ॥ ೩ ॥